# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1683

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 14.03.2022

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪಡಿತರ ಚೀಟಿದಾರರಿಗೆ ನ್ಯಾಯಬೆಲೆ ಅಂಗಡಿಗಳಲ್ಲಿ ಆಹಾರ ಪದಾರ್ಥಗಳನ್ನು ವಿತರಿಸಲು ರಾಜ್ಯದಾದ್ಯಂತ ಬಯೋಮೆಟ್ರಿಕ್ ವ್ಯವಸ್ಥೆಯನ್ನು ಜಾರಿಗೊಳಿಸಲಾಗಿದೆಯೇ; (ವಿವರ ನೀಡುವುದು) | ರಾಜ್ಯದಲ್ಲಿರುವ 20,084 ನ್ಯಾಯಬೆಲೆ ಅಂಗಡಿಗಳ ಪೈಕಿ ಸಮರ್ಪಕ ಇಂಟರ್‌ನೆಟ್ ವ್ಯವಸ್ಥೆ ಇರುವ 20,016 ನ್ಯಾಯಬೆಲೆ ಅಂಗಡಿಗಳನ್ನು ಗಣಕೀಕೃತ ಪಾಯಿಂಟ್ ಆಫ್ ಸೇಲ್(ಪಾಸ್) ವ್ಯವಸ್ಥೆಗೆ ಪರಿವರ್ತಿಸಿ ಬಯೋದೃಢೀಕರಣದ ಮೂಲಕ ಪಡಿತರ ವಿತರಿಸಲಾಗುತ್ತಿದೆ. ಸಮರ್ಪಕ ಇಂಟರ್‌ನೆಟ್ ವ್ಯವಸ್ಥೆ ಇಲ್ಲದ 68 ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರವನ್ನು ಸಾಂಪ್ರದಾಯಿಕ ಕೈಬಿಲ್ಲಿನ ಮೂಲಕ ವಿತರಿಸಲಾಗುತ್ತಿದೆ. ಪ್ರತಿ ತಿಂಗಳು ರಾಜ್ಯದಲ್ಲಿ ಸರಾಸರಿ ಶೇ.92 ರಷ್ಟು ಪಡಿತರ ಚೀಟಿದಾರರು ಪಡಿತರ ಪಡೆಯುತ್ತಿದ್ದಾರೆ. |
| ಆ | ಗ್ರಾಮೀಣ ಪ್ರದೇಶಗಳಲ್ಲಿ ಅಂತರ್ಜಾಲದ ಸಮಸ್ಯೆಗಳಿಂದ ಬಯೋಮೆಟ್ರಿಕ್ ವ್ಯವಸ್ಥೆಯಲ್ಲಿ ಆಹಾರ ಪದಾರ್ಥಗಳನ್ನು ವಿತರಿಸಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪಡಿತರ ಚೀಟಿದಾರರಿಗೆ ಪಡಿತರ ವಿತರಿಸುವ ವ್ಯವಸ್ಥೆಯನ್ನು ಸರಳೀಕರಿಸಲು ಸರ್ಕಾರ ಕ್ರಮ ಕೈಗೊಂಡಿದೆಯೇ;(ಮಾಹಿತಿ ಒದಗಿಸುವುದು) | ಆನ್‌ಲೈನ್ ಮುಖಾಂತರ ಬಯೋಮೆಟ್ರಿಕ್ ವ್ಯವಸ್ಥೆಯಡಿ ಆಹಾರಧಾನ್ಯಗಳನ್ನು ವಿತರಣೆ ಮಾಡುವಾಗ ಕೆಲವು ಸಂದರ್ಭಗಳಲ್ಲಿ ನೆಟ್‌ವರ್ಕ್ ಸಮಸ್ಯೆ ಮತ್ತು ಸರ್ವರ್ ಜನಸಂದಣಿಯಾಗುವುದನ್ನು ಸರ್ಕಾರ ಗಮನಿಸಿದೆ. ಇದಕ್ಕಾಗಿ ನ್ಯಾಯಬೆಲೆ ಅಂಗಡಿಯವರು ಸ್ಥಳೀಯವಾಗಿ ಲಭ್ಯವಿರುವ ಯಾವುದೇ ನೆಟ್‌ವರ್ಕ್ ಬಳಕೆ ಮಾಡಬಹುದು ಹಾಗೂ ಎನ್.ಐ.ಸಿ.ಯ ಸಹಯೋಗದೊಂದಿಗೆ ಅಂತಹ ಸಮಸ್ಯೆಗಳನ್ನು ಪರಿಹರಿಸಲಾಗುತ್ತಿದೆ.<br><br>ಬಯೋಮೆಟ್ರಿಕ್ ಪಡೆಯುವಲ್ಲಿ ತೊಂದರೆ ಆಗುವ ವಯೋವೃದ್ಧರಿಗೆ ಬಯೋಮೆಟ್ರಿಕ್ ಹೊರತುಪಡಿಸಿ ಶೇ.2 ರಷ್ಟು ಫಲಾನುಭವಿಗಳಿಗೆ ಪಡಿತರ ಹಂಚಿಕೆ ನೀಡುವ ಅವಕಾಶವು ಜಾರಿಯಲ್ಲಿದೆ. ಇದಲ್ಲದೇ, ಅನಿವಾರ್ಯ ಸಂದರ್ಭಗಳಲ್ಲಿ ಪೂರ್ವಾನುಮತಿಯೊಂದಿಗೆ ಬಯೋಮೆಟ್ರಿಕ್ ಹೊರತುಪಡಿಸಿ ಆಹಾರಧಾನ್ಯ ವಿತರಣೆಗೆ ಅವಕಾಶ ನೀಡಲಾಗಿದೆ. |

| | | |
|---|---|---|
| ಇ | ರಾಜ್ಯದ ಅನೇಕ ಭಾಗಗಳಲ್ಲಿ ಬಡವರಿಗೆ ಸೇರಬೇಕಾದ ಪಡಿತರವು ಕಾಳಸಂತೆಯಲ್ಲಿ ಮಾರಾಟವಾಗುತ್ತಿರುವ ಪ್ರಕರಣಗಳು ಬೆಳಕಿಗೆ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಈ | ಬಂದಿದ್ದಲ್ಲಿ, ಇಂತಹ ಪ್ರಕರಣಗಳನ್ನು ತಡೆಗಟ್ಟಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; ಈ ರೀತಿ ಅಕ್ರಮಗಳಲ್ಲಿ ಭಾಗಿಯಾಗಿರುವ ಅಧಿಕಾರಿಗಳು ಮತ್ತು ನ್ಯಾಯಬೆಲೆ ಅಂಗಡಿಗಳ ಮೇಲೆ ಕೈಗೊಂಡಿರುವ ಕ್ರಮಗಳೇನು? (ಪ್ರಕರಣವಾರು ಸಂಪೂರ್ಣ ವಿವರ ನೀಡುವುದು) | ಅಕ್ರಮ ದಾಸ್ತಾನು, ಮತ್ತು ಕಾಳಸಂತೆ ವಹಿವಾಟುಗಳು ನಡೆಯುವುದನ್ನು ತಡೆಗಟ್ಟಿ ನಿರ್ದಿಷ್ಟ ಫಲಾನುಭವಿಗಳಿಗೆ ಪಡಿತರ ಆಹಾರ ಧಾನ್ಯಗಳು ತಲುಪುವುದನ್ನು ಖಾತರಿ ಪಡಿಸಿಕೊಳ್ಳಲು ಜಾಗೃತಿ ಸಮಿತಿಗಳನ್ನು ರಚಿಸಲಾಗಿದೆ. ಅಕ್ರಮ ತಡೆಯಲು ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ. ಜೊತೆಗೆ ಆಹಾರ, ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಇಲಾಖೆ ಅಧಿಕಾರಿಗಳನ್ನೊಳಗೊಂಡ "ರಾಜ್ಯ ಮಟ್ಟದ ಆಹಾರ ಜಾಗೃತಿ ಮತ್ತು ತನಿಖಾ ದಳ" ವನ್ನು ರಚಿಸಲಾಗಿದೆ.<br><br>ಅಗತ್ಯ ವಸ್ತುಗಳ ಕಾಯಿದೆಯಡಿ ರಾಜ್ಯಾದ್ಯಂತ ಪ್ರಕರಣಗಳನ್ನು ದಾಖಲಿಸಲಾಗಿದ್ದು, ಪ್ರಸಕ್ತ ಸಾಲಿನಲ್ಲಿ ರಾಜ್ಯದಲ್ಲಿ ಒಟ್ಟು 394 ಪ್ರಕರಣಗಳನ್ನು ಪತ್ತೆ ಮಾಡಿದ್ದು, ಅವುಗಳಲ್ಲಿ 371 ಪ್ರಕರಣಗಳಲ್ಲಿ ಎಫ್.ಐ.ಆರ್ ದಾಖಲಿಸಲಾಗಿದೆ. 42469.32 ಕ್ವಿಂ. ಅಕ್ಕಿ, 960.89 ಕ್ವಿಂ. ಗೋಧಿ, 1570.45 ಕ್ವಿಂ. ನುಚ್ಚಕ್ಕಿ, 22115.05 ಭತ್ತ, 598.38 ಕ್ವಿಂ. ರಾಗಿ, 3.50 ಕ್ವಿಂ. ಬೇಳೆ ವಶಪಡಿಸಿಕೊಂಡಿದ್ದು ಇವುಗಳ ಅಂದಾಜು ಮೌಲ್ಯ ರೂ. 14,23,70,764 ಆಗಿರುತ್ತದೆ. (ವಿವರವನ್ನು ಅನುಬಂಧದಲ್ಲಿ ಒದಗಿಸಲಾಗಿದೆ)<br>ಬೆಂಗಳೂರು ಜಿಲ್ಲೆಯ ಅಕ್ರಮದಲ್ಲಿ ಗೋದಾಮು ವ್ಯವಸ್ಥಾಪಕರು ಮತ್ತು ಕಲಬುರಗಿ ಜಿಲ್ಲೆಯ ಅಕ್ರಮಗಳಲ್ಲಿ ಕಲಬುರಗಿಯ ಉಗ್ರಾಣ ವ್ಯವಸ್ಥಾಪಕರು ಭಾಗಿಯಾಗಿದ್ದಾರೆ. ಈ ಅಧಿಕಾರಿಗಳ ವಿರುದ್ಧ ಅಗತ್ಯ ವಸ್ತುಗಳ ಕಾಯ್ದೆ 1955 ರಡಿ ಪ್ರಕರಣ ದಾಖಲಿಸಲಾಗಿದೆ. |

**ಆನಾಸ 54 ಡಿಆರ್‌ಎ 2022 (ಇ-ಆಫೀಸ್)**

(ಉಮೇಶ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.